# ಕರ್ನಾಟಕ ವಿಧಾನ ಪರಿಷತ್ತು.

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1036
2. ಮಾನ್ಯ ಸದಸ್ಯರ ಹೆಸರು : ಶ್ರೀ ರಘುನಾಥ ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು
3. ಉತ್ತರಿಸುವ ದಿನಾಂಕ : 21.09.2021
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೀದರ್ ಜಿಲ್ಲೆಯಲ್ಲಿನ ಹುಮ್ನಾಬಾದ್ ತಾಲ್ಲೂಕಿನ ಹಳ್ಳಿಕೇಡನಲ್ಲಿರುವ BSSK ಸಕ್ಕರೆ ಕಾರ್ಖಾನೆಯನ್ನು ಪುನರ್ ಪ್ರಾರಂಭಿಸುವ ಬಗ್ಗೆ ಪ್ರಸಕ್ತ ಸಾಲಿನಲ್ಲಿ ಸರ್ಕಾರವು ಯಾವ ಕ್ರಮ ಕೈಗೊಳ್ಳುವುದು:(ವಿವರ ನೀಡುವುದು) | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆಗೆ ಚುನಾಯಿತ ಆಡಳಿತ ಮಂಡಳಿಯು ಇರುತ್ತದೆ. ಈ ಕಾರ್ಖಾನೆಯ ಪುನಶ್ಚೇತನದ ಸಂಬಂಧ ಆಡಳಿತ ಮಂಡಳಿಯು ಸ್ಪಷ್ಟವಾದ ತೀರ್ಮಾನವನ್ನು ತೆಗೆದುಕೊಳ್ಳಬೇಕಾಗಿರುತ್ತದೆ. ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಪುನರ್ ಪ್ರಾರಂಭಿಸುವುದರ ಬಗ್ಗೆ ಕಾರ್ಖಾನೆಯ ಆಡಳಿತ ಮಂಡಳಿಯು ಸ್ಪಷ್ಟವಾದ ತೀರ್ಮಾನವನ್ನು ತೆಗೆದುಕೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದಲ್ಲಿ ಈ ಕಾರ್ಖಾನೆಯನ್ನು ಪುನರ್ ಪ್ರಾರಂಭಿಸುವುದರ ಬಗ್ಗೆ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು.<br>ಆರ್ಥಿಕ ದುಸ್ಥಿತಿ ಮತ್ತು ಇತರೆ ಆಡಳಿತಾತ್ಮಕ ಕಾರಣಗಳಿಂದ ಸ್ಥಗಿತಗೊಂಡಿರುವ ರಾಜ್ಯದ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಖಾಸಗಿಯವರಿಗೆ ದೀರ್ಘಾವಧಿಯ ಮೇಲೆ ಗುತ್ತಿಗೆ ನೀಡುವುದರ ಮೂಲಕ ಪುನ:ಶ್ಚೇತನಗೊಳಿಸುವುದು ಸರ್ಕಾರದ ಪ್ರಸ್ತುತ ನೀತಿಯಾಗಿರುತ್ತದೆ. ಸರ್ಕಾರವು ಇದುವರೆವಿಗೂ 08 ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಖಾಸಗಿಯವರಿಗೆ ಗುತ್ತಿಗೆ ನೀಡಿ, ಪುನಶ್ಚೇತನಗೊಳಿಸುವ ಮೂಲಕ ಆ ಭಾಗದ ಕಬ್ಬು ಬೆಳೆಗಾರ ರೈತರ ಮತ್ತು ಕಾರ್ಮಿಕರ ಹಿತವನ್ನು ಕಾಪಾಡಲಾಗಿದೆ. |
| (ಆ) | ಬೀದರ್ ಜಿಲ್ಲೆಯಲ್ಲಿನ ಸಕ್ಕರೆ ಕಾರ್ಖಾನೆಗಳು ರೈತರಿಗೆ ನೀಡಬೇಕಾದ. ಬಾಕಿ ಹಣವೆಷ್ಟು: (ಕಾರ್ಖಾನೆವಾರು ಮಾಹಿತಿ ಒದಗಿಸುವುದು) | ಬೀದರ್ ಜಿಲ್ಲೆಯಲ್ಲಿ 2020-21ನೇ ಸಾಲಿನಲ್ಲಿ ಸಹಕಾರಿ ವಲಯದ 2 ಹಾಗೂ ಖಾಸಗಿ ವಲಯದ 2 ಹೀಗೆ ಒಟ್ಟು 4 ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸಿರುತ್ತವೆ. ಈ ಕಾರ್ಖಾನೆಗಳಿಗೆ ಪ್ರತಿ ಟನ್ ಒಂದಕ್ಕೆ ನಿಗದಿಪಡಿಸಿರುವ ಎಫ್.ಆರ್.ಪಿ. ದರ, ಅದರಂತೆ ಕಾರ್ಖಾನೆಗಳು ನುರಿಸಿದ ಕಬ್ಬಿಗೆ ಪಾವತಿಸಬೇಕಾದ ಕಬ್ಬು ಬಿಲ್ಲು ಮೊತ್ತ, ಪಾವತಿಸಿದ-ಮೊತ್ತ ಮತ್ತು ಬಾಕಿ ಮೊತ್ತದ ವಿವರಗಳು ದಿನಾಂಕ 31.08.2021 ರಲ್ಲಿದ್ದಂತೆ ಈ ಕೆಳಕಂಡಂತಿದೆ. |

| ಕ್ರ. ಸಂ. | ಕಾರ್ಖಾನೆಯ ಹೆಸರು | ನಿಗದಿಪಡಿಸಿದ ಎಫ್.ಆರ್.ಪಿ. ದರ ಪ್ರತಿ ಮೆ.ಟನ್ ಒಂದಕ್ಕೆ (ರೂ.ಗಳಲ್ಲಿ) | ಪಾವತಿಸ ಬೇಕಾದ ಮೊತ್ತ | ಪಾವತಿಸಿ ರುವ ಮೊತ್ತ | ಬಾಕಿ ಮೊತ್ತ |
|---|---|---|---|---|---|
| | | | (ರೂ. ಲಕ್ಷಗಳಲ್ಲಿ) | | |
| 1 | ಭಾಲ್ಕೇಶ್ವರ ಶುಗರ್ಸ್ ಲಿ., ಬಾಜೋಳಗ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ | 2708 | 11419 | 11419 | 0 |
| 2 | ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ., ಮೊಗ್ಖಾಲ್ ಗ್ರಾಮ, ಬೀದರ್ ತಾಲ್ಲೂಕು ಮತ್ತು ಜಿಲ್ಲೆ | 2708 | 6012 | 5803 | 209 |
| 3 | ಮಹಾತ್ಮಗಾಂಧಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಭಾಲ್ಕಿತಾಲ್ಲೂಕು ಬೀದರ್ ಜಿಲ್ಲೆ | 2708 | 8753 | 8753 | 0 |
| 4 | ನಾರಂಜಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಇಮಾಂಪುರ್, ಬೀದರ್ ಜಿಲ್ಲೆ | 2708 | 6844 | 6844 | 0 |

......2

| | | |
|---|---|---|
| (ಇ) | ಹಾಗಿದ್ದಲ್ಲಿ, ರೈತರಿಗೆ ನೀಡಬೇಕಾದ ಬಾಕಿ ಹಣವನ್ನು ಎಷ್ಟು ಕಾಲಮಿತಿಯೊಳಗೆ ನೀಡಲಾಗುವುದು: (ಸ್ಪಷ್ಟ ಮಾಹಿತಿಯನ್ನು ನೀಡುವುದು) | ಕೇಂದ್ರ ಸರ್ಕಾರವು ನಿಗದಿಪಡಿಸಿರುವ ಎಫ್.ಆರ್.ಪಿ. ದರವು ಕಬ್ಬು ಕಟಾವು ಮತ್ತು ಸಾಗಾಣಿಕೆ ದರಗಳನ್ನು ಸಹ ಒಳಗೊಂಡಿರುತ್ತದೆ. ಬೀದರ್ ಜಿಲ್ಲೆಯ 4 ಸಕ್ಕರೆ ಕಾರ್ಖಾನೆಗಳು ಕಬ್ಬು ಸರಬರಾಜು ಮಾಡಿದ ರೈತರಿಗೆ ಪ್ರತಿ ಮೆ. ಟನ್ ಒಂದಕ್ಕೆ ಕಬ್ಬು ಬಿಲ್ಲು ಮೊತ್ತ ರೂ.1950.00 ಗಳನ್ನು ಹಾಗೂ ಕಬ್ಬು ಕಟಾವು ಮತ್ತು ಸಾಗಾಣಿಕೆ ದರ ರೂ.758.00 ಗಳನ್ನು ಪಾವತಿಸಿರುತ್ತವೆ<br><br>ಬೀದರ್ ಜಿಲ್ಲೆಯ 3 ಸಕ್ಕರೆ ಕಾರ್ಖಾನೆಗಳು ಸರ್ಕಾರವು ನಿಗದಿಪಡಿಸಿರುವ ಎಫ್.ಆರ್.ಪಿ. ದರದಂತೆ ಕಬ್ಬು ಬಿಲ್ಲು ಮೊತ್ತವನ್ನು ಪೂರ್ಣವಾಗಿ ಪಾವತಿಸಿರುತ್ತವೆ. ಬೀದರ್ ಕಿಸಾನ್ ಶಕ್ಕರ್ ಕಾರ್ಖಾನಾ ಲಿ. - ಈ ಕಾರ್ಖಾನೆಯು ದಿನಾಂಕ 31.08.2021ರ ಅಂತ್ಯಕ್ಕೆ ರೂ.2.09 ಕೋಟಿಗಳಷ್ಟು ಮೊತ್ತವನ್ನು ಪಾವತಿಸಲು ಬಾಕಿ ಉಳಿಸಿಕೊಂಡಿರುತ್ತದೆ.<br><br>ಸದರಿ ಮೊತ್ತದ ವಸೂಲಾತಿಗಾಗಿ ದಿನಾಂಕ:02.02.2021 ಮತ್ತು 18.06.2021 ರಂದು ಶಾಸನಬದ್ಧ ನೋಟೀಸ್‌ಗಳನ್ನು ಜಾರಿಗೊಳಿಸಲಾಗಿದೆ. ಆದಾಗ್ಯೂ ಕಾರ್ಖಾನೆ ಬಾಕಿ ಮೊತ್ತ ಪಾವತಿಸದೇ ಇದ್ದಲ್ಲಿ, ಕಬ್ಬು (ನಿಯಂತ್ರಣ) ಆದೇಶ, 1966ರ ಅವಕಾಶಗಳ ರೀತ್ಯಾ ವಸೂಲಾತಿಗೆ ಕ್ರಮವಹಿಸಲಾಗುವುದು. |
| (ಈ) | ರೈತರಿಗೆ ಪ್ರತಿ ವರ್ಷ ಕಬ್ಬಿನ ಬೆಲೆ ನಿಗಧಿಯು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿರುವುದು ನಿಜವಲ್ಲವೇ: ಹಾಗಿದ್ದಲ್ಲಿ, ರೈತರಿಗೆ ಶಾಶ್ವತವಾದ ಏಕದರ ನಿಗಧಿಗೊಳಿಸುವ ಬಗ್ಗೆ ಸರ್ಕಾರ ಆಲೋಚಿಸಿದ್ದರೆ ಮಾಹಿತಿ ನೀಡುವುದು? | ಕಬ್ಬು (ನಿಯಂತ್ರಣ) ಆದೇಶ 1966ರ ಖಂಡ 3ರ ಅವಕಾಶದಂತೆ ಕೇಂದ್ರ ಸರ್ಕಾರವು ಪ್ರತಿ ಸಕ್ಕರೆ ಹಂಗಾಮಿಗೆ ಕಬ್ಬಿನ ದರವನ್ನು ನಿಗದಿಗೊಳಿಸಿ ಘೋಷಿಸುತ್ತದೆ.<br>ಕೇಂದ್ರ ಸರ್ಕಾರದ ಕೃಷಿ ವೆಚ್ಚ ಮತ್ತು ಬೆಲೆ ಆಯೋಗವು **(Commission for Agricultural Costs and Prices)** ಕೃಷಿ ತಜ್ಞರು, ಸಕ್ಕರೆ ಕಾರ್ಖಾನೆಗಳ ಪ್ರತಿನಿಧಿಗಳು ಮತ್ತು ರೈತ ಪ್ರತಿನಿಧಿಗಳನ್ನೊಳಗೊಂಡ ಸಮಿತಿಯಾಗಿರುತ್ತದೆ. ಈ ಸಮಿತಿಯ ಸದಸ್ಯರು ರೈತರು ಬೆಳೆಯುವ ಕಬ್ಬಿನ ಸಂಬಂಧ ಒಂದು ವರ್ಷ ಮುಂಚಿತವಾಗಿ ವಿವಿಧ ರಾಜ್ಯಗಳಿಗೆ ಭೇಟಿ ನೀಡಿ ಸಂಬಂಧಿಸಿದ ರಾಜ್ಯ ಸರ್ಕಾರದೊಡನೆ ಚರ್ಚಿಸಿ, ಪ್ರಸ್ತುತ ಸಕ್ಕರೆ ಉತ್ಪಾದನಾ ವೆಚ್ಚ, ಬೇಡಿಕೆ ಮತ್ತು ಪೂರೈಕೆ, ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿನ ದರ ಇತ್ಯಾದಿ ಅಂಶಗಳನ್ನು ಅವಲೋಕಿಸಿ, ಅಧ್ಯಯನ ನಡೆಸಿ, ಕಬ್ಬಿಗೆ ವೈಜ್ಞಾನಿಕ ದರ ನಿಗದಿ ಮಾಡುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುತ್ತದೆ.<br>ಅದರಂತೆ, ಕೇಂದ್ರ ಸರ್ಕಾರವು ಸದರಿ ಶಿಫಾರಸ್ಸಿನ ಅಂಶಗಳ ಅನ್ವಯ ಕಬ್ಬಿಗೆ ನ್ಯಾಯ ಮತ್ತು ಲಾಭದಾಯಕ ಬೆಲೆಯನ್ನು (Fair and Remunerative Price) (FRP) ನಿಗದಿಗೊಳಿಸಿ ಘೋಷಿಸುತ್ತದೆ. ಕೇಂದ್ರ ಸರ್ಕಾರವು ನಿಗದಿಪಡಿಸುವ ಎಫ್.ಆರ್.ಪಿ.ಯನ್ನು ಆಧರಿಸಿ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013 ಮತ್ತು ತಿದ್ದುಪಡಿ ಅಧಿನಿಯಮ 2014ರ ಕಲಂ 4(ಎ) ರೀತ್ಯಾ ರಾಜ್ಯದ ಸಕ್ಕರೆ ಕಾರ್ಖಾನೆಗಳ ಸಕ್ಕರೆ ಇಳುವರಿಯನ್ನು ಆಧರಿಸಿ ಕಾರ್ಖಾನೆವಾರು ಎಫ್.ಆರ್.ಪಿ ದರವನ್ನು ಘೋಷಣೆ ಮಾಡಲಾಗುತ್ತದೆ.<br><br>ಸಕ್ಕರೆ ಉತ್ಪಾದನಾ ವೆಚ್ಚ, ಬೇಡಿಕೆ ಮತ್ತು ಪೂರೈಕೆ, ಮಾರುಕಟ್ಟೆಯ ದರಗಳ ಏರಿಳಿತ, ಇಳುವರಿ -ಇತ್ಯಾದಿ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಕೇಂದ್ರ ಸರ್ಕಾರವು ನಿಗದಿಗೊಳಿಸುವ ಎಫ್.ಆರ್.ಪಿ, ಬೆಲೆಯನ್ನು ಆಧರಿಸಿ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಸರಬರಾಜಾಗುವ ಕಬ್ಬಿಗೆ ದರ ನಿಗದಿಗೊಳಿಸುವುದರಿಂದ ರಾಜ್ಯದಲ್ಲಿ ರೈತರು ಬೆಳೆಯುವ ಕಬ್ಬಿಗೆ ಶಾಶ್ವತವಾಗಿ ಏಕದರ ನಿಗದಿಗೊಳಿಸಲು ಸಾಧ್ಯವಾಗುವುದಿಲ್ಲ. |

ಕಡತ ಸಂಖ್ಯೆ:ಸಿಐ 93 ಎಸ್‌ಜಿಎಫ್ 2021

(ಶಂಕರ ಬ. ಪಾಟೀಲ.ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು